# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 661

ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ಸಚಿವರು : ಮಾನ್ಯ ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 17-09-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಎಷ್ಟು ಜಿಲ್ಲೆಗಳಲ್ಲಿ ಖಾಸಗಿ ಬಸ್ಸುಗಳು ಸಂಚರಿಸುತ್ತಿವೆ; ಇವುಗಳಿಗೆ ಯಾವ ರೀತಿಯಲ್ಲಿ ಲೈಸೆನ್ಸ್ ನೀಡಲಾಗುತ್ತದೆ. | ರಾಜ್ಯದ 15 ಜಿಲ್ಲೆಗಳಲ್ಲಿ ಮಜಲು ವಾಹನ (ಸ್ಟೇಜ್ ಕ್ಯಾರೇಜ್)ಗಳು ಸಂಚರಿಸುತ್ತಿವೆ. ಅಲ್ಲದೆ, ಖಾಸಗಿ ಬಸ್ಸುಗಳು ಪ್ರವಾಸಿ ಬಸ್ಸುಗಳಾಗಿ ನೋಂದಣಿಯಾಗಿದ್ದು, ಒಪ್ಪಂದ ವಾಹನಗಳು ಕರ್ನಾಟಕ ರಾಜ್ಯದಾದ್ಯಂತ ಹಾಗೂ ಅಖಿಲ ಭಾರತ ಪ್ರವಾಸಿ ರಹದಾರಿಯನ್ನು ಪಡೆದು ತೆರಿಗೆ ಪಾವತಿಯ ಮೇರೆಗೆ ಭಾರತದಾದ್ಯಂತ ಸಂಚರಿಸಲು ಅನುಮತಿಯನ್ನು ಹೊಂದಿರುತ್ತವೆ. |
| ಆ | ಸ್ಟೇಜ್ ಕ್ಯಾರಿಯರ್ ಅನುಮತಿ ಎಂದರೇನು? ಕಳೆದ 2 ವರ್ಷಗಳಲ್ಲಿ ಎಷ್ಟು ವಾಹನಗಳಿಗೆ ಈ ಅನುಮತಿಯನ್ನು ನೀಡಲಾಗಿದೆ. ಜಿಲ್ಲಾವಾರು ವಿವರ ನೀಡುವುದು. | ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 2(40)ರ ಪ್ರಕಾರ "Stage Carriage means a motor vehicle constructed or adopted to carry more than 6 passengers excluding the driver for hire or reward at separate fares paid by or for individual passengers, either for the whole journey or for stages of the journey (ಮಜಲು ವಾಹನ ಎಂದರೆ ಪೂರ್ಣ ಪ್ರಯಾಣಕ್ಕೆ ಅಥವಾ ಪ್ರಯಾಣದ ಮಜಲುಗಳಿಗೆ ಪ್ರತ್ಯೇಕ ಪ್ರಯಾಣಿಕರು ಸಂದಾಯ ಮಾಡಿದ ಅಥವಾ ಅವರ ಪರವಾಗಿ ಸಂದಾಯ ಮಾಡಲಾದ ಪ್ರತ್ಯೇಕ ಪ್ರಯಾಣ ದರಗಳಲ್ಲಿ ಬಾಡಿಗೆಗೆ ಅಥವಾ ಪ್ರತಿಫಲಕ್ಕೆ, ಚಾಲಕನನ್ನು ಹೊರತುಪಡಿಸಿ 6ಕ್ಕಿಂತ ಹೆಚ್ಚು ಪ್ರಯಾಣಿಕರನ್ನು ಸಾಗಿಸಲು ನಿರ್ಮಿಸಿದ ಅಥವಾ ಅಳವಡಿಸಿದ ಮೋಟಾರು ವಾಹನ)"<br><br>ಒಂದು ಮಾರ್ಗದಲ್ಲಿ ಪ್ರತೀ ಹಂತದಲ್ಲಿ ಪ್ರಯಾಣಿಕರನ್ನು ಕೊಂಡೊಯ್ಯಲು ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 72ರ ಅಡಿಯಲ್ಲಿ ನೀಡಲಾಗುವ ರಹದಾರಿಯನ್ನು ಸ್ಟೇಜ್ ಕ್ಯಾರಿಯರ್ ಅನುಮತಿ ಎಂದು ಹೇಳಲಾಗುತ್ತದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ ಸಾರಿಇ 174 ಸಾಇಪ 2015 ದಿನಾಂಕ: 07-03-2019 ರನ್ವಯ ರಾಜ್ಯದಲ್ಲಿ ಸಮಗ್ರ ಸಾರಿಗೆ ಯೋಜನೆಯನ್ನು ಜಾರಿಗೆ ತಂದಿದ್ದು, ಇದರ ಅನ್ವಯ ಕರ್ನಾಟಕ ರಾಜ್ಯದ ಎಲ್ಲಾ ನಗರ, ಪಟ್ಟಣ ಮತ್ತು ಹಳ್ಳಿಗಳಿಗೆ ಸಾರಿಗೆ ಸೌಲಭ್ಯವನ್ನು ಒದಗಿಸುವ ಸಂಪೂರ್ಣ ಜವಾಬ್ದಾರಿಯು ಸರ್ಕಾರದ ಅಧೀನ ಸಾರಿಗೆ ಸಂಸ್ಥೆಗಳದ್ದಾಗಿರುತ್ತದೆ.<br><br>ಸಮಗ್ರ ಸಾರಿಗೆ ಯೋಜನೆಯನ್ನು ಜಾರಿಗೆ ತಂದ ನಂತರ ರಾಜ್ಯದಲ್ಲಿ ಖಾಸಗಿ ಮಜಲು ವಾಹನ ಪ್ರವರ್ತಕರಿಗೆ ಯಾವುದೇ ರಹದಾರಿಯನ್ನು ನೀಡಲಾಗಿರುವುದಿಲ್ಲ. |

| | | |
|---|---|---|
| ಇ | ಕೊರೋನಾದಿಂದ ಲಾಕ್‌ಡೌನ್ ಸಮಯದಲ್ಲಿ ಖಾಸಗಿ ಬಸ್ಸುಗಳ ವಾಹನ ಚಾಲಕರಾಗಿ, ನಿರ್ವಾಹಕರಾಗಿ ಕೆಲಸ ಮಾಡುತ್ತಿದ್ದ ನೌಕರರಿಗೆ ಸರ್ಕಾರದಿಂದ ಯಾವ ರೀತಿಯ ಸೌಲಭ್ಯಗಳನ್ನು ಒದಗಿಸಲಾಗಿದೆ? | ಕೊರೋನಾದಿಂದ ಲಾಕ್‌ಡೌನ್-1ರ ಸಮಯದಲ್ಲಿ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಒಮ್ಮೆ ಪರಿಹಾರ ಧನವಾಗಿ ರೂ.5,000/-ಗಳನ್ನು ಹಾಗೂ ಲಾಕ್‌ಡೌನ್-2ರ ಸಮಯದಲ್ಲಿ ಆಟೋರಿಕ್ಷಾ, ಟ್ಯಾಕ್ಸಿ ಮತ್ತು ಮ್ಯಾಕ್ಸಿಕ್ಯಾಬ್ ಚಾಲಕರಿಗೆ ಒಮ್ಮೆ ಪರಿಹಾರ ಧನವಾಗಿ ರೂ.3,000/-ಗಳನ್ನು ಸರ್ಕಾರದ ವತಿಯಿಂದ ವಿತರಿಸಲಾಗಿರುತ್ತದೆ.<br><br>ಖಾಸಗಿ ಬಸ್ಸುಗಳ ವಾಹನ ಚಾಲಕರಾಗಿ, ನಿರ್ವಾಹಕರಾಗಿ ಕೆಲಸ ಮಾಡುತ್ತಿದ್ದ ನೌಕರರಿಗೆ ಸಾರಿಗೆ ಇಲಾಖೆಯಿಂದ ಯಾವುದೇ ರೀತಿಯ ಪರಿಹಾರ ಧನವನ್ನು ನೀಡಲಾಗಿರುವುದಿಲ್ಲ. |

ಟಿಡಿ 95 ಟಿಡಿಕ್ಯೂ 2021

(ಬಿ. ಶ್ರೀರಾಮುಲು)
ಮಾನ್ಯ ಸಾರಿಗೆ ಮತ್ತು ಪರಿಶಿಷ್ಟ
ಪಂಗಡಗಳ ಕಲ್ಯಾಣ ಸಚಿವರು